# ಇದಕ್ಕೆ ಪರ್ಯಾಯವಿಲ್ಲ

ಬೃಜ್ ಶ್ರೀವಾಸ್ತವ

ನೈಸರ್ಗಿಕ ಕಲಿಕೆಗೆ ಆರರಿಂದ ಹತ್ತು ವರ್ಷಗಳ ವಯಸ್ಸು ಬಹುಸೂಕ್ತ, ಸಮರ್ಪಕ ಹಾಗು ಅತ್ಯುತ್ತಮ. ಈ ವಯಸ್ಸಿನಲ್ಲಿ ಏನು ಕಲಿಯಲಾಗುತ್ತದೆಯೋ ಅದು ಭವಿಷ್ಯಕ್ಕೆ ನಿರ್ಣಾಯಕವಾಗುತ್ತದೆ ಮತ್ತು ವಿದ್ಯಾರ್ಥಿಯಲ್ಲಿ ಗುಣಮಟ್ಟದ ಅಡಿಪಾಯವನ್ನು ಹಾಕುತ್ತದೆ. ಶಾಲೆಯನ್ನು ಸೇರುವ ಈ ವಯಸ್ಸಿನ ಮಗು ಕಲಿಕೆಗೆ ಹೆಚ್ಚು ಸಿದ್ಧವಾಗಿರುತ್ತದೆ. ಇದರ ಆಧಾರದ ಮೇಲೆ ಸಿಸಿಇ ಸೇರಿದಂತೆ ಶೈಕ್ಷಣಿಕ ಯೋಜನೆಗಳ ಅನುಷ್ಠಾನಕ್ಕೆ ಅನೇಕ ಶಿಫಾರಸುಗಳನ್ನು ಮಾಡಲಾಗುತ್ತಿದೆ. ಈ ಯೋಜನೆಗಳು ಇನ್ನೂ ತಮ್ಮ ಹಾದಿಯಲ್ಲಿದ್ದು, ಗುರಿಯನ್ನು ತಲುಪುವ ಕನಸು ಕಾಣುತ್ತಿವೆ.2009ರ ಶಿಕ್ಷಣದ ಹಕ್ಕು ಕಾಯ್ದೆಯನ್ನು (Right to Education Act 2009) ಶಿಕ್ಷಣ ಕ್ಷೇತ್ರದ ಎರಡನೆಯ ಪರ್ವದ ಹೊಸ ಪ್ರಾರಂಭವೆಂದು ಪರಿಗಣಿಸಬಹುದು. ಈ ಹಿನ್ನೆಲೆಯಲ್ಲಿ, ಬಹಳ ಆಸ್ಥೆಯಿಂದ ಮಕ್ಕಳನ್ನು ಅರಿಯಲು ಪ್ರಯತ್ನ ಮಾಡುವ ನಿರೀಕ್ಷೆ ಮಾತ್ರವಲ್ಲ, ಸಮಾಜದ ಪ್ರತಿಯೊಂದು ವರ್ಗಕ್ಕೂ ಖಚಿತವಾಗಿ ಈ ಕುರಿತು ಗಮನಹರಿಸಲು ಒಂದು ವಾತಾವರಣವನ್ನು ಸೃಷ್ಟಿಸಲು ಒಂದು ಉಪಕ್ರಮವನ್ನು ಆರಂಭಿಸಲಾಗಿದೆ. ವಿಚಾರಗಳು ಮತ್ತು ವಿಷಯಗಳನ್ನು ಗ್ರಹಿಸುವ ರೀತಿಯಲ್ಲಿನ ಬದಲಾವಣೆಗಳು ನಾಗರಿಕತೆಯ ಪ್ರಗತಿ ಪಥಕ್ಕೆ ಪ್ರಮುಖ ಅಂಶವಾಗಿದ್ದು, ಈ ಸಾವಿರಾರು ವರ್ಷಗಳಲ್ಲಿ ಮನುಷ್ಯರಾಗುವುದು ಮಾತ್ರ ಉಲ್ಲೇಖಿಸಬೇಕಾದ ಏಕಮಾತ್ರ ಸಾಧನೆ ಎಂದು ಅರ್ಥವಾಯಿತು. ಗಾಲಿಬ್ ಹೇಳಿದಂತೆ – 'ಬಸ್ ಕೆ ದುಶ್ವಾರ್ ಹೈ ಹರ್ ಕಾಮ್ ಕಾ ಆಸಾನ್ ಹೋನಾ ಆದ್ಮಿ ಕೋ ಭೀ ಮಾಯಸ್ಸರ್ ನಹೀನ್ ಇನ್ಸಾನ್ ಹೋನಾ' (ಪ್ರತಿಯೊಂದು ಕಾರ್ಯವೂ ಸುಲಭವಾಗುವುದು ಕಷ್ಟ. ಎಷ್ಟರಮಟ್ಟಿಗೆಂದರೆ ಮನುಷ್ಯನಿಗೆ ಮನುಷ್ಯನಾಗಲು ಕೂಡ) ಮನುಷ್ಯನು ಮನುಷ್ಯನಾಗುವುದರ ಪ್ರಯಾಣ ಎಂತಹದ್ದು? ಇದು ಶಿಕ್ಷಣದಿಂದ ಅತಿ ಕನಿಷ್ಠ ನಿರೀಕ್ಷೆ. ಒಂದು ಮಗು ಈ ಪ್ರಯಾಣದಲ್ಲಿ ಸೇರ್ಪಡೆಯಾದಾಗ ಅದು ಕೇವಲ ಪುಸ್ತಕದ ತಿಳಿವಳಿಕೆಯಿಂದ ಮಾತ್ರವಲ್ಲದೆ ಅಭ್ಯಾಸದ ಮೂಲಕ, ಸಹಜವಾಗಿ ಅಭ್ಯಾಸಕ್ಕೆ ಒಳಪಡಿಸಿದ ಸ್ವಯಂ ರೂಪಿತ ತಿಳಿವಳಿಕೆ ಮೂಲಕ ಮುಂದೆ ಭವಿಷ್ಯದಲ್ಲಿ ಸೂಕ್ಷ್ಮಭಾವದ ಜವಾಬ್ದಾರಿಯುತ ವ್ಯಕ್ತಿಯಾಗುತ್ತದೆ.

ಮಗುವು ಮನುಷ್ಯನಾಗುವ ಬದಲು ಒಂದು ಸಾಧನವಾಗುತ್ತಿರುವ ಪರಿಸ್ಥಿತಿಯಲ್ಲಿ ನಾವು ಇಂದು ಇರುವಂತಾಗಿದೆ. ಅಥವಾ ಕೇವಲ ಒಂದೇ ದೃಷ್ಟಿಕೋನದಿಂದ ಬೆಳೆಯುತ್ತಿರುವ , ಬದುಕುತ್ತಿರುವ ಮನುಷ್ಯರಾಗುವ ಪರಿಸ್ಥಿತಿಗೆ ನಾವು ಮಕ್ಕಳನ್ನು ಒಳಗಾಗಿಸುತ್ತಿದ್ದೇವೆಂದು ಭಾಸವಾಗುತ್ತಿದೆ. ನಾವು ಮಕ್ಕಳನ್ನು ಪರೀಕ್ಷೆಗಳಲ್ಲಿ ಬಂಧಿಸಿದ್ದೇವೆ, ಪರೀಕ್ಷೆಗಳನ್ನು ಹೆಚ್ಚು ಸಾಂಪ್ರದಾಯಿಕಗೊಳಿಸಿದ್ದೇವೆ ಮತ್ತು ಅವರನ್ನು ಗಿಳಿಯಂತೆ ಪುಸ್ತಕಗಳನ್ನು ಕಂಠಪಾಠ ಮಾಡುವಂತೆ ಬಲವಂತಪಡಿಸಿದ್ದೇವೆ. ಮಕ್ಕಳು ವಿದ್ಯಾರ್ಥಿಯಾಗಿ ಮುಂದುವರೆಯುವುದನ್ನು ನಿರೀಕ್ಷಿಸುತ್ತಾ ನಾವು ಬೋಧಕ ಅಥವಾ 'ಗುರು'ವಾಗದೆ ನಿರಂತರ ಪರೀಕ್ಷೆ ಮತ್ತು ಪರಿಶೀಲನೆಯನ್ನಷ್ಟೇ ಮಾಡುತ್ತಿರುತ್ತೇವೆ. ನಾವು ಮರೆತಿರುವುದೇನೆಂದರೆ , " ಪರಖ್‌ನಮತ್, ಪರಖ್‌ನ ಮೇ ಕೊಯಿ ಅಪ್ನ ನಹೀನ್ ರಹ್ತ ಕಿಸಿ ಭೀ ಆಯಿನೆ ಮೇ ದೇರ್ ತಕ್ ಚೆಹ್ರ ನಹೀನ್ ರಹ್ತ" ಅಂದರೆ 'ಪರೀಶೀಲಿಸಬೇಡಿ ಮತ್ತು ಪರೀಕ್ಷೆ ಮಾಡಬೇಡಿ, ಹೀಗೆ ಮಾಡಿದಲ್ಲಿ ನಮ್ಮದೇನೂ ಉಳಿಯುವುದಿಲ್ಲ, ಯಾವ ಕನ್ನಡಿಯೂ ಬಹಳ ಕಾಲ ಮುಖವನ್ನು ಹಿಡಿದಿಡಲಾರದು.' ನಮ್ಮ ಮೂಲ ಉದ್ದೇಶವನ್ನು ಉಳಿಸದಂತಹ ಯಾವುದೇ ರೀತಿಯ ಪರಿಶೀಲನೆ ಅಥವಾ ಪರಿಶೀಲನೆಯು ಬಹಳ ಅಪಾಯಕಾರಿ. ನಾವು ಉದ್ದೇಶಿಸಿರುವಂತಹವರು ತುಂಬು

ಭಾವನೆಯ, ಸಂಬಂಧಗಳನ್ನು ಅರಿಯುವ ಯಾರೋ ಆಗಿರಬೇಕು. ಪ್ರಸ್ತುತವಾಗಿ ಈ ಗುರಿಯನ್ನು ಶಿಫಾರಸು ಮಾಡಲಾದ ಸಮಗ್ರ ಮತ್ತು ನಿರಂತರ ಮೌಲ್ಯಮಾಪನದ (Comprehensive and Continuous Evaluation) ಯೋಜನೆಯು ತನ್ನ ಚೌಕಟ್ಟಿನೊಳಗೆ ಒಳಗೊಂಡಿದೆಯೆಂಬುದರಲ್ಲಿ ಸಂಶಯವೇ ಇಲ್ಲ.ಮಕ್ಕಳಲ್ಲಿ ಸಮಗ್ರ ಮತ್ತು ನಿರಂತರ ಮೌಲ್ಯಮಾಪನ ನಡೆಸಬೇಕೆಂದರೆ ಮೊಟ್ಟಮೊದಲಿಗೆ ಶಿಕ್ಷಕರು, ಕಲಿಕಾ ಸಂಸ್ಥೆಗಳನ್ನೂ ಸೇರಿದಂತೆ, ಪ್ರಸಕ್ತ ಬದಲಾವಣೆಗಳಿಗೆ ಅನುಗುಣವಾಗಿ ನಂಬಿಕೆಗಳು ಮತ್ತು ವಿಚಾರಗಳನ್ನು ಪುನಃ ರೂಪಿಸಬೇಕಾಗುತ್ತದೆ ಅಥವಾ ಸ್ಥಾಪಿಸಬೇಕಾಗುತ್ತದೆ. ನಿಯಂತ್ರಣ ಸಂಸ್ಥೆಗಳು ಇದನ್ನು ಒಪ್ಪಿಕೊಳ್ಳುವುದು ಮಾತ್ರವಲ್ಲದೆ ಇದನ್ನು ಅನುಷ್ಠಾನಗೊಳಿಸುವ ಕಡೆಗೆ ಕಾರ್ಯಗತವಾಗಬೇಕಾಗುತ್ತದೆ. ಇದು ಆದಲ್ಲಿ ನಮ್ಮ ಸಮುದಾಯವೂ ಅದನ್ನು ಸ್ವೀಕರಿಸುವ ಸಾಧ್ಯತೆಯಿದೆ. ವಿದ್ಯಾರ್ಥಿಗಳೊಂದಿಗೆ ಸಂಪರ್ಕಿಸುವಾಗ ಮತ್ತು ವ್ಯವಹರಿಸುವಾಗ ಈ ಪ್ರತಿಯೊಂದೂ ಪ್ರಭಾವಗಳು ಭರವಸೆ ಮತ್ತು ತಾಳ್ಮೆಯಿಂದ ಕಾರ್ಯವನ್ನು ಮುಂದುವರಿಸುವ ಕೇವಲ ಒಂದು ತತ್ವವನ್ನು ಅಳವಡಿಸಿಕೊಳ್ಳಬೇಕಾಗುತ್ತದೆ ಎಂದು ಶಾಲೆಯ ಮುಖ್ಯೋಪಾಧ್ಯಾಯನಾಗಿ ನನ್ನ ಶಾಲೆಯಲ್ಲಿ ಅದನ್ನು ಕಾರ್ಯಗತಗೊಳಿಸುವಲ್ಲಿನ ನನ್ನ ಅನುಭವಗಳ ಆಧಾರದ ಮೇಲೆ ಇದನ್ನು ನಾನು ಬರೆಯುತ್ತಿದ್ದೇನೆ.

ನಾವು ನಮ್ಮ ಶಾಲೆಯ ದಿನಚರಿಯನ್ನು ಪ್ರಾರ್ಥನಾ ಸಭೆಯೊಂದಿಗೆ ಪ್ರಾರಂಭಿಸುತ್ತೇವೆ. ಈ ಪ್ರಾರ್ಥನೆಯನ್ನು ಕೇವಲ ಆಧ್ಯಾತ್ಮಿಕ ಸಂತೋಷ ಮತ್ತು ಆನಂದದ ಅಭ್ಯಾಸವೆಂದು ಪರಿಗಣಿಸಬಾರದು ಅಥವಾ ಇದಕ್ಕೆ ಮಹತ್ತರ ಭರವಸೆಯನ್ನು ಹಚ್ಚಬಾರದು. ಇಲ್ಲಿರುವ ಏಕೈಕ ಗಮನಾರ್ಹ ವಿಷಯವೆಂದರೆ ಸಾಮೂಹಿಕತೆ. ಇದಾದ ನಂತರ ತರಗತಿಯಲ್ಲಿ ಮಕ್ಕಳು ಸ್ವಯಂ ಮೌಲ್ಯಮಾಪನಕ್ಕೆ ಒಡ್ಡಬೇಕಾಗುತ್ತದೆ. ಇದು ಮಾಡಬಹುದಾದ ಆಸಕ್ತಿದಾಯಕವಾದ ಸೃಜನಶೀಲ ಕಾರ್ಯ, ಅದನ್ನು ನಡೆಸುವವನು ಬದ್ಧತೆಯುಳ್ಳ ಮತ್ತು ಉತ್ಸಾಹಭರಿತ ವ್ಯಕ್ತಿಯಾಗಿರಬೇಕು ಎನ್ನುವುದು ಇದಕ್ಕಿರುವ ಏಕೈಕ ನಿಬಂಧನೆಯಾಗಿದೆ.

ಬೋಧಕರು ಕೇವಲ ಇದನ್ನು ಮಾತ್ರ ಮಾಡಿದರೆ ನಿಸ್ಸಂದೇಹವಾಗಿ, ಮಕ್ಕಳು ದಿನಚರಿಯ ಅರ್ಥವನ್ನು ಅರ್ಥಮಾಡಿಕೊಳ್ಳುತ್ತಾರೆ. ಒಬ್ಬ ವ್ಯಕ್ತಿಯು ತನ್ನ ದೈನಂದಿನ ಜೀವನವನ್ನು ನಿರ್ವಹಿಸುವಂತಾದರೆ ಮಾತ್ರ ಜೀವನದಲ್ಲಿ ಯಶಸ್ವಿಯಾಗುತ್ತಾನೆ. ಆದ್ದರಿಂದ ಈ ಅರಿವನ್ನು ಸಮಗ್ರ ಮತ್ತು ನಿರಂತರ ಮೌಲ್ಯಮಾಪನವು ಉಂಟುಮಾಡಿದರೆ ಅಷ್ಟೇ ಸಾಕು. ವಿಭಿನ್ನ ವೈಯಕ್ತಿಕ ಸಾಮರ್ಥ್ಯಗಳನ್ನು ಹೊಂದಿರುವ ಮಕ್ಕಳ ಗುಂಪನ್ನು ನಿರ್ವಹಿಸುವುದು ನಿಜಕ್ಕೂ ಸುಲಭವಲ್ಲವಾದರೂ, ಇದನ್ನು ಯಾವ ನಿರ್ದಿಷ್ಟ ಪ್ರಸ್ತುತತೆಯಿಲ್ಲದೆ ನಡೆಸುವಾಗ ಮಾತ್ರ ಕಷ್ಟವೆನಿಸುತ್ತದೆ. ಶಿಕ್ಷಕರು ತರಗತಿಗೆ ಚಾಲನೆ ನೀಡುವವರು ಮತ್ತು ದೊಡ್ಡ ಹೊಣೆಗಾರಿಕೆಯನ್ನು ಹೊಂದಿರುವವರು. ಹೀಗಾಗಿ ಸಮಗ್ರ ಮತ್ತು ನಿರಂತರ ಮೌಲ್ಯಮಾಪನವು ಹೇಗೆ ಎಚ್ಚರದಿಂದಿರಬೇಕು ಎಂಬುದನ್ನು ಕಲಿಸಿಕೊಡುತ್ತದೆ.

ಆರರಿಂದ ಹದಿನಾಲ್ಕು ವಯಸ್ಸಿನ ಮಕ್ಕಳು ಹುಡುಗಾಟ ಮತ್ತು ತುಂಟರಾಗಿರುತ್ತಾರೆ. ತಮ್ಮ ಸುತ್ತ ಅನೇಕರಿದ್ದಾಗ ಅವರು ಬಹಳ ಗದ್ದಲ ಮಾಡುತ್ತಾರೆ. ಇದರ ಬಗ್ಗೆ ಏಕೆ ತಲೆಕೆಡಿಸಿಕೊಳ್ಳಬೇಕು? ಮಕ್ಕಳು ಉಪಯುಕ್ತ ವಿಷಯಗಳ ಬಗ್ಗೆ ಮಾತನಾಡಲು ಪ್ರಾರಂಭಿಸುವ ರೀತಿಯಲ್ಲಿ ಸ್ವಲ್ಪ ಬುದ್ಧಿವಂತಿಕೆ ಮತ್ತು ತಿಳುವಳಿಕೆಯನ್ನು ಹೊಂದಿರುವ ಶಿಕ್ಷಕರು ಈ ಪರಿಸ್ಥಿತಿಯನ್ನು ಬಳಸಿಕೊಳ್ಳಬಹುದು. ತಿಳುವಳಿಕೆಯನ್ನು ಉಂಟುಮಾಡುವ ಅಂಶಗಳಾದ ಕಾರ್ಯಯೋಜನೆ-ಕೆಲಸಗಳು, ಚಟುವಟಿಕೆಗಳನ್ನು ಮಾಡುವುದು, ವಿಷಯ

ಸ್ವರೂಪಕ್ಕೆ ತಕ್ಕಂತೆ ಆಸಕ್ತಿ ಉಂಟಾಗುವ ರೀತಿಯಲ್ಲಿ ಕಲಿಸುವುದು, ಮನೆಗೆಲಸವನ್ನು ಪರಿಶೀಲಿಸುವುದು, ಅದರ ಬಗ್ಗೆ ಅಭಿಪ್ರಾಯ ಕೊಡುವುದು, ಕಲಿಸುವ ಮೊದಲು ತಯಾರಿ, ಮಕ್ಕಳಿಗೆ ಪ್ರೋತ್ಸಾಹ ಇತ್ಯಾದಿ ಅಂಶಗಳು ಸಮಗ್ರ ಮತ್ತು ನಿರಂತರ ಮೌಲ್ಯಮಾಪನದಲ್ಲಿದೆ.

ಇಂದಿನ ಹೊಸ ಕಾಲದಲ್ಲಿ ಸಮಗ್ರ ಮತ್ತು ನಿರಂತರ ಮೌಲ್ಯಮಾಪನದ ತಳಹದಿಯಾದ ಮತ್ತು ಬೋಧನೆಯ ಬೆನ್ನೆಲುಬಾದ ಕೆಲವು ಸೂತ್ರಗಳಿವೆ. ಈ ವಿಧಾನವು ಪರ್ಯಾಯವಿಲ್ಲದ್ದು, ಬೋಧನಾ ವಿಧಾನಗಳಲ್ಲಿ ಬದಲಾವಣೆಯ ಪ್ರಶ್ನೆ ಬಂದಾಗಲೆಲ್ಲಾ ಸಮಗ್ರ ಮತ್ತು ನಿರಂತರ ಮೌಲ್ಯಮಾಪನದ ನೆರವು ಮತ್ತು ಬೆಂಬಲವನ್ನು ಖಂಡಿತವಾಗಿ ಪಡೆಯಬೇಕಾಗುತ್ತದೆ.

(ಹಿಂದಿಯಿಂದ ಶ್ರೀ ರಾಮ್‌ನಿಕ್ ಮೋಹನ್ ಅನುವಾದಿಸಲಾದ ಲೇಖನ)

ಬೃಜ್ ಅವರು ಮಧ್ಯಪ್ರದೇಶದ ವಿದಿಶಾದಲ್ಲಿರುವ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದಾರೆ. ವಿದಿಶಾದ ಜಿಲ್ಲಾ ಪ್ರಾಜೆಕ್ಟ್ ಕಚೇರಿಯಲ್ಲಿ ಸರ್ವ ಶಿಕ್ಷಾ ಅಭಿಯಾನದ ಸಹಾಯಕ ಪ್ರಾಜೆಕ್ಟ್ ಸಂಯೋಜಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ರಾಜ್ಯ ಸಂಪನ್ಮೂಲ ತಂಡದಲ್ಲೂ ಅವರು ಸದಸ್ಯರು. ಮಧ್ಯಪ್ರದೇಶದ ಸಿಸಿಇ ಪ್ರಧಾನ ಯೋಜನೆಯಲ್ಲಿ ಸಹಾಯಕರಾಗಿದ್ದರು ಮತ್ತು ಮೌಲ್ಯಮಾಪನ ನೀತಿಯ ಅಭಿವೃದ್ಧಿಯಲ್ಲೂ ನೆರವಾಗಿದ್ದರು. ತಮ್ಮ ಶಾಲೆಯಲ್ಲಿ ಸದಾ ಹೊಸತರ ಆವಿಷ್ಕಾರದಲ್ಲಿ ತೊಡಗಿಕೊಂಡಿರುವ ಬೃಜ್ ಅವರು ಕಾವ್ಯ ರಚನೆಯಲ್ಲೂ ಆಸಕ್ತರು. ಬೃಜ್ ಅವರ ಹಲವಾರು ಕಾವ್ಯ ಮತ್ತು ಲೇಖನಗಳು ಔಟ್‌ಲುಕ್, ಇಂಡಿಯಾ ಟುಡೆ, ಸಾಕ್ಷಾತ್ಕಾರ್, ಹನ್ಸ್, ವಗರ್ತ್, ವಸುಧಾ, ಜನ್‌ಸತ್ತಾ, ನವ್ ದುನಿಯಾ, ರಾಷ್ಟ್ರೀಯ ಸಹಾರಾ ಮೊದಲಾದ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ. ಬೃಜ್ ಅವರನ್ನು brajshrivastava7@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ:ಹೇಮಾದೇವಿ.ಬಿ.ಎನ್

ಪರಿಶೀಲನೆ: ಚಂದ್ರಶೇಖರ್ ಮಂಡೆಕೋಲು